# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 315 |
| ಸದಸ್ಯರ ಹೆಸರು | ಶ್ರೀ ಆರ್.ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 09.12.2020 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಂದಾಯ ಇಲಾಖೆಯಲ್ಲಿ ಅದರಲ್ಲೂ ಮುಖ್ಯವಾಗಿ ಜಿಲ್ಲಾಧಿಕಾರಿಗಳು ಅಸಿಸ್ಟೆಂಟ್ ಕಮೀಷನರ್, ತಹಶೀಲ್ದಾರ್‌ಗಳ ಹಾಗೂ ಸಬ್ ರಿಜಿಸ್ಟ್ರಾರ್ ರವರುಗಳ ಕಛೇರಿಗಳಲ್ಲಿ ನಡೆಯುವ ಭ್ರಷ್ಟಾಚಾರಗಳನ್ನು ತಡೆಯಲು ಸಂಬಂಧಪಟ್ಟ ಅಧಿಕಾರಿಗಳ ಮೇಲೆ ಕ್ರಮಕೈಗೊಳ್ಳಲು ಸರ್ಕಾರದಲ್ಲಿರುವ ವ್ಯವಸ್ಥೆ ಏನು; | ಸರ್ಕಾರವು ಭ್ರಷ್ಟಾಚಾರವನ್ನು ತಡೆಗಟ್ಟುವ ನಿಟ್ಟಿನಲ್ಲಿ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ–1988ನ್ನು ಜಾರಿಗೆ ತಂದಿದ್ದು ಸದರಿ ಕಾಯ್ದೆ ಅಡಿಯಲ್ಲಿ ಸ್ವೀಕೃತವಾಗುವ ದೂರಿನ ಅನ್ವಯ ಮಾನ್ಯ ಲೋಕಾಯುಕ್ತ/ಭ್ರಷ್ಟಾಚಾರ ನಿಗ್ರಹ ದಳ ಸಂಸ್ಥೆಯು ಸಂಬಂಧಿಸಿದ ತಪ್ಪಿತಸ್ಥ ಅಧಿಕಾರಿ/ನೌಕರರ ವಿರುದ್ಧ ಸೂಕ್ತ ವಿಚಾರಣೆ/ ದಾಳಿಯನ್ನು ಜರುಗಿಸಿ ಕಾನೂನಿನ ಪ್ರಕಾರ ಕ್ರಮಕೈಗೊಳ್ಳಲಾಗುತ್ತಿದೆ. |
| ಆ) | ದೂರು ಬಂದಾಗ ಮಾತ್ರ ಲೋಕಾಯುಕ್ತ, ಎ.ಸಿ.ಬಿ ಅಧಿಕಾರಿಗಳು ದಾಳಿ ಮಾಡುತ್ತಿದ್ದು, ಸದರಿ ಕಛೇರಿಗಳಲ್ಲಿ ದಿನನಿತ್ಯ ಭ್ರಷ್ಟಾಚಾರದಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದರಿಂದ ಸರ್ಕಾರ ಈ ಬಗ್ಗೆ ಗಮನ ಹರಿಸಿ ಧಿಡೀರ್ ತಪಾಸಣೆ ನಡೆಸಿ ಕ್ರಮ ಕೈಗೊಳ್ಳಲು ವಿಶೇಷ ಕಾರ್ಯಕ್ರಮ ಏನಾದರೂ ರೂಪಿಸುತ್ತದೆಯೇ; | ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 88 ಸೇಲೋಯು/2016(ಭಾಗ–1) ದಿನಾಂಕ:06.07.2016ರಲ್ಲಿ ಸರ್ಕಾರದ ಎಲ್ಲಾ ಕ್ಷೇತ್ರ ಇಲಾಖೆ ಗಳು/ ಶಾಸನಬದ್ಧ ಸಂಸ್ಥೆಗಳು/ ವಿಭಾಗ / ಜಿಲ್ಲಾ ಮಟ್ಟದ ಕಚೇರಿಗಳಲ್ಲಿ ಜಾಗೃತ ಕೋಶಗಳನ್ನು ಸೃಜಿಸಿ ಆದೇಶಿಸಿರುತ್ತದೆ. ಸದರಿ ಆದೇಶದಲ್ಲಿನ ಮಾರ್ಗಸೂಚಿ ಅನುಸಾರ ಕ್ರಮವಹಿಸಲಾಗುತ್ತಿದೆ. |
| ಇ) | ಲೋಕಾಯುಕ್ತ ಅಥವಾ ಎ.ಸಿ.ಬಿ ದಾಳಿ ನಡೆಸಿ ತಪ್ಪಿತಸ್ಥ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳಬೇಕೆಂದು ವರದಿ ಕೊಟ್ಟರು ಅನುಮತಿ ನೀಡಲು ವಿಳಂಬ ನೀತಿ ಅನುಸರಿಸುತ್ತಿರುವುದೇಕೆ; | ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ 1988ರಡಿಯಲ್ಲಿ ಲೋಕಾಯುಕ್ತ/ಭ್ರಷ್ಟಾಚಾರ ನಿಗ್ರಹ ದಳ ಸಂಸ್ಥೆಯಿಂದ ತಪ್ಪಿತಸ್ಥ ಅಧಿಕಾರಿ/ನೌಕರರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಆರೋಪ ಪಟ್ಟಿ ಸಲ್ಲಿಸಲು ಶಿಸ್ತು ಪ್ರಾಧಿಕಾರಿಗಳ ಅಭಿಯೋಜನಾ ಮಂಜೂರಾತಿ ಕೋರಿ ಸ್ವೀಕೃತವಾಗುವ ಪ್ರಕರಣಗಳಲ್ಲಿ ತನಿಖಾಧಿಕಾರಿಗಳು ಸಲ್ಲಿಸಿದ ಅಂತಿಮ ವರದಿ/ ಪಂಚನಾಮೆ ಇತ್ಯಾದಿ ದಾಖಲೆಗಳನ್ನು ಸುತ್ತೋಲೆ ಸಂ:ಸಿಆಸುಇ 31 ಸೇಇವಿ 2001, ದಿ:24.08.2001 ರಲ್ಲಿನ ಮಾರ್ಗಸೂಚಿಗಳನ್ವಯ ಪರಿಶೀಲಿಸಿ, ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಅಭಿಯೋಜನಾ ಮಂಜೂರಾತಿ ನೀಡಲು ವಿಳಂಬವಿಲ್ಲದಂತೆ ಕ್ರಮವಹಿಸಲಾಗುತ್ತಿದೆ. |

| | | |
|---|---|---|
| ಈ) | ದಾಖಲಾಗಿ ಅಮಾನತ್ತಿನಲ್ಲಿರುವ ಅಧಿಕಾರಿಗಳನ್ನು ಅವರು ದೋಷಮುಕ್ತರಾಗುವ ಮುನ್ನವೇ ಮತ್ತೆ ಸರ್ಕಾರಿ ಸೇವೆಗೆ ನೇಮಿಸುತ್ತಿರುವುದು ಸರಿಯಾದ ಕ್ರಮವೇ; ಇದನ್ನು ತಪ್ಪಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದೇ? | ದಾಖಲಾಗಿ ಅಮಾನತ್ತಿನಲ್ಲಿರುವ ಅಧಿಕಾರಿ /ನೌಕರರುಗಳನ್ನು ಸೇವೆಗೆ ಪುನರ್ ನೇಮಕ ಮಾಡುವ ಮುನ್ನ ಲೋಕಾಯುಕ್ತ/ ಭ್ರಷ್ಟಾಚಾರ ನಿಗ್ರಹದಳ ಸಂಸ್ಥೆಯ ಅಭಿಪ್ರಾಯ ಪಡೆದ ನಂತರವೇ ಅಂತಹ ಅಧಿಕಾರಿ/ನೌಕರರನ್ನು ಸೇವೆಗೆ ಪುನರ್ ನೇಮಕ ಮಾಡಲಾಗುತ್ತದೆ. |

ಇ–ಕಂಇ 210 ಬಿಎಂಎಂ 2020

(ಆರ್. ಅಶೋಕ್)
ಕಂದಾಯ ಇಲಾಖೆ